


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 194 (1383)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಸಹಕಾರ ಸಚಿವರು

ವಿಷಯ : ರಾಜ್ಯದಲ್ಲಿರುವ ಸಹಕಾರ ಬ್ಯಾಂಕುಗಳ ಬಗ್ಗೆ

(ಅ) ಪ್ರಸ್ತುತ ರಾಜ್ಯಾದ್ಯಂತ ಇರುವ ಸಹಕಾರ ಬ್ಯಾಂಕುಗಳೆಷ್ಟು ; (ಸಂಪೂರ್ಣ ವಿವರ ನೀಡುವುದು)

(ಆ) ಕಳೆದ ಮೂರು ವರ್ಷಗಳಿಂದ ಸಹಕಾರ ಬ್ಯಾಂಕುಗಳಿಂದ ನೀಡಿದ ಸಾಲದ ಮೊತ್ತವೆಷ್ಟು ; ಇದರಲ್ಲಿ ರೈತರಿಗೆ ಮತ್ತು ಇತರೆ ವರ್ಗದವರಿಗೆ ನೀಡಿದ ಸಾಲದ ಮೊತ್ತವೆಷ್ಟು ; (ವಿವರವನ್ನು ನೀಡುವುದು)

(ಇ) ರಾಜ್ಯದ ಸಹಕಾರ ಬ್ಯಾಂಕುಗಳಲ್ಲಿ, ಸಾಲಮನ್ನಾ ಯೋಜನೆಯಡಿ ಮನ್ನಾ ಮಾಡಲಾದ ಮೊತ್ತವೆಷ್ಟು ; ಇದರಲ್ಲಿ ರೈತರು ಪಡೆದ ಸಾಲದ ಮೊತ್ತವೆಷ್ಟು; (ಶೇಕಡವಾರು ವಿವರ ನೀಡುವುದು)

(ಈ) ರಾಜ್ಯಾದ್ಯಂತ ಇರುವ ಸಹಕಾರ ಬ್ಯಾಂಕುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು ; ಸರ್ಕಾರಿ/ಗುತ್ತಿಗೆ/ಹೊರ ಗುತ್ತಿಗೆ ನೌಕರರ ಸಂಖ್ಯೆ ಎಷ್ಟು ; (ಮಾಹಿತಿಯೊಂದಿಗೆ ವಿವರ ನೀಡುವುದು)

(ಉ) ಕಳೆದ ಐದು ವರ್ಷಗಳಿಂದ ಎಷ್ಟು ಗುತ್ತಿಗೆ ಮತ್ತು ಹೊರಗುತ್ತಿಗೆ ನೌಕರರನ್ನು ಸರ್ಕಾರಿ ನೌಕರರನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ ; ಆಯ್ಕೆ ಮಾಡಿಕೊಂಡಿದ್ದಲ್ಲಿ ಯಾವ ಯಾವ ಮಾನದಂಡಗಳ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಲಾಗಿದೆ? (ಜಿಲ್ಲಾವಾರು ಮಾಹಿತಿ ನೀಡುವುದು)